

# ಮಾನವ ಸಂತಾನೋತ್ಪತ್ತಿಯ ಕುರಿತು ಪಾಠ ಮಾಡುವುದು

ಧನ್ಯಾ ಕೆ.

**ಪ್ರೌಢ ಶಾಲೆಯ ಜೀವಶಾಸ್ತ್ರದ ಪಠ್ಯಪುಸ್ತಕದಲ್ಲಿರುವ 'ಮಾನವರಲ್ಲಿ ಸಂತಾನೋತ್ಪತ್ತಿ' ಎನ್ನುವ ಅಧ್ಯಾಯವನ್ನು ವಿದ್ಯಾರ್ಥಿಗಳು ಹಾಗೂ ಶಿಕ್ಷಕರು ಹಿಂಜರಿಕೆಯಿಂದಲೇ ನೋಡುತ್ತಾರೆ. ಇದಕ್ಕಂಟಿದ ಕಳಂಕದ ಕಲೆಯನ್ನು ಹೇಗೆ ತೊಡೆದುಹಾಕಬಹುದು? ವಾಸ್ತವಿಕವಾದ ಮಾತುಕತೆಗಳ ಮೂಲಕ ಈ ಅಧ್ಯಾಯವನ್ನು ವಿವರಿಸಲು ಸಾಧ್ಯವಿದೆಯೇ? ಇದನ್ನು ಯಾವ ರೀತಿ ಮುಕ್ತವಾಗಿ ಹಾಗೂ ವಿದ್ಯಾರ್ಥಿಗಳಿಗೆ ನೆರವಾಗುವಂತೆ ನಾವು ಮಾಡಬಹುದು?**

ಪ್ರೌಢ ಶಾಲೆಯ ವಿದ್ಯಾರ್ಥಿಗಳು ಹದಿಹರೆಯಕ್ಕೆ ಕಾಲಿಡುತ್ತಿದ್ದಂತೆ, ದೇಹ ಮತ್ತು ಲೈಂಗಿಕತೆಯ ವಿಷಯಗಳ ಕುರಿತು ಅವರ ಕುತೂಹಲ ಮತ್ತು ಆಸಕ್ತಿಯು ಕೆರಳಿರುತ್ತದೆ. ಅವರಿಗೆ ತಮ್ಮ ದೇಹದ ಬಗ್ಗೆ ಕುತೂಹಲವೂ ಹಾಗೂ ಅದರ ಬಗ್ಗೆ ತಿಳಿದುಕೊಳ್ಳಬೇಕೆಂಬ ಉತ್ಸುಕತೆಯು ಬೆಳೆಯುವುದರ ಜೊತೆಗೆ ಈ ಹಂತದಲ್ಲಿ ಅವರು ಅನುಭವಿಸುವ ದೈಹಿಕ ಮತ್ತು ಸಂವೇಗಾತ್ಮಕ ಬದಲಾವಣೆಗಳನ್ನು ಅರ್ಥ–ಮಾಡಿಕೊಳ್ಳಬೇಕೆಂಬ ಉತ್ಸುಕತೆಯೂ ಉಂಟಾಗುತ್ತದೆ. ವಿದ್ಯಾರ್ಥಿಗಳಿಗೆ ತಮ್ಮ ಲೈಂಗಿಕತೆ ಹಾಗೂ ಲೈಂಗಿಕ ಯೋಗಕ್ಷೇಮದ ಕುರಿತು ನಿಖರವಾದ ಮಾಹಿತಿಯನ್ನು ಕೊಡಬೇಕು ಮತ್ತು ಅವರು ಈ ವಿಷಯದ ಕುರಿತು ಪರ್ಯಾಲೋಚಿಸಲು, ವಿಮರ್ಶಾತ್ಮಕವಾಗಿ ಆಲೋಚಿಸಲು ಹಾಗೂ ಧೈರ್ಯವಾಗಿ ತಮ್ಮ ಆಲೋಚನೆಗಳನ್ನು ಅಥವಾ ಪ್ರಶ್ನೆಗಳನ್ನು ವ್ಯಕ್ತಪಡಿಸಲು ಅವರನ್ನು ಸಮರ್ಥರನ್ನಾಗಿಸಬೇಕು ಎಂಬುದರ ಮಹತ್ವವನ್ನು ಬಹುತೇಕ ಎಲ್ಲ ಶಾಲಾ ಪಠ್ಯಕ್ರಮಗಳೂ ಗುರುತಿಸುತ್ತವೆ. ಆದಾಗ್ಯೂ, ಬಹುತೇಕ ಪಠ್ಯಪುಸ್ತಕಗಳು ನೀಡುವ ಮೂಲಭೂತ ಮಾಹಿತಿಗಳು ಸಂಪೂರ್ಣವಾಗಿ ಪ್ರಸ್ತುತ ಸಂದರ್ಭಕ್ಕೆ ತಕ್ಕಂತೆ ಇರುವುದಿಲ್ಲವಲ್ಲದೆ ಸಮಗ್ರವಾಗಿಯೂ ಇರುವುದಿಲ್ಲ. ಉದಾಹರಣೆಗೆ, ಅವು ವೀರ್ಯ ಸ್ಖಲನ, ಶಿಶ್ನದ ನಿಮಿರುವಿಕೆ, ಮುಟ್ಟಿನ ಮುಂಚಿನ ಸಹಲಕ್ಷಣಗಳು ಮುಂತಾದ ವಿಷಯಗಳ ಹಿಂದಿನ ಜೈವಿಕತೆಯನ್ನು ವಿವರಿಸುವುದಿಲ್ಲ. ಅನೇಕ ವಿದ್ಯಾರ್ಥಿಗಳಿಗೆ ಅಂತರ್ಜಾಲವು ಸುಲಭವಾಗಿ ಮಾಹಿತಿಗಳನ್ನು ಪಡೆದುಕೊಳ್ಳಲು ಇರುವಂತಹ ಮತ್ತೊಂದು ಮೂಲವಾಗಿದೆ. ದುರದೃಷ್ಟವೆಂದರೆ, ಅದರಿಂದ ಅವರು ಪಡೆದುಕೊಳ್ಳುವ ಹೆಚ್ಚಿನ ಮಾಹಿತಿಯು ಅಪೂರ್ಣ ತುಣುಕುಗಳಾಗಿರಬಹುದು, ಹಾಗೂ ಗಂಡಸರ ಲೈಂಗಿಕ ಅನುಭವಗಳಿಗೆ ಮಾತ್ರ ಪ್ರಾಮುಖ್ಯತೆ ಕೊಡುವಂತದ್ದಾಗಿರಬಹುದು, ಸೌಂದರ್ಯ ಮತ್ತು ಸಂಭೋಗದ ಕುರಿತು ಅವಾಸ್ತವಿಕವಾದ ಮಾದರಿಗಳನ್ನು ಗೊತ್ತುಮಾಡಬಹುದು. ಇದು ಅವರ ಲೈಂಗಿಕ ಬೆಳವಣಿಗೆ ಹಾಗೂ ಯೋಗಕ್ಷೇಮದ ಮೇಲೆ ನಕಾರಾತ್ಮಕ ಪರಿಣಾಮವನ್ನು ಬೀರಬಹುದು. ಕೊನೆಯದಾಗಿ, ವೈಯಕ್ತಿಕ ಮುಜುಗರ, ಸೈದ್ಧಾಂತಿಕ ಘರ್ಷಣೆ, ಹಾಗೂ ಶೈಕ್ಷಣಿಕ ನಿರ್ಬಂಧಗಳಂತಹ

ಕಾರಣಗಳನ್ನೂ ಒಳಗೊಂಡೊಂತೆ ಹಲವಾರು ಕಾರಣಗಳಿಂದಾಗಿ, ಈ ವಿಷಯದ ಕುರಿತು ಮುಕ್ತವಾಗಿ ಮಾತನಾಡಲು ಅವಕಾಶಗಳನ್ನು ಕಂಡುಕೊಳ್ಳಲು ಶಿಕ್ಷಕರು ಕಷ್ಟಪಡಬಹುದು.

ಪ್ರೌಢಶಾಲೆಯ ವಿಜ್ಞಾನದ ಪಠ್ಯಕ್ರಮದಲ್ಲಿ ಇರುವಂತಹ 'ಮಾನವರಲ್ಲಿ ಸಂತಾನೋತ್ಪತ್ತಿ' ಎನ್ನುವ ಘಟಕವು ಈ ಪ್ರಕ್ರಿಯೆಯ ಜೈವಿಕತೆಯನ್ನು ಚರ್ಚಿಸಲು ಅವಕಾಶವನ್ನು ಒದಗಿಸುವುದು ಮಾತ್ರವಲ್ಲದೆ ಲೈಂಗಿಕತೆ ಹಾಗೂ ಸಂತಾನೋತ್ಪತ್ತಿಗೆ ಸಂಬಂಧಿಸಿದಂತಿರುವ ಅವಶ್ಯಕತೆಗಳು ಮತ್ತು ಮೌಲ್ಯಗಳ ಬಗ್ಗೆ ಪರ್ಯಾಲೋಚನೆ ಮಾಡುವುದನ್ನು ಉತ್ತೇಜಿಸಲು ಸಹ ದಾರಿಗಳನ್ನು ತೋರಿಸಬಹುದು. ಮಾನವ ದೇಹ, ಹದಿಹರೆಯದಲ್ಲಿ ಉಂಟಾಗುವ ಅಂಗರಚನೆ ಮತ್ತು ವರ್ತನೆಯಲ್ಲಿನ ಬದಲಾವಣೆ, ಹಾಗೂ ಸಂಭೋಗದಲ್ಲಿನ ವಿಜ್ಞಾನ ಅಂಶವನ್ನು ಕುರಿತು ಅರಿವನ್ನು ಮೂಡಿಸಲು ನಾನು ವಿನ್ಯಾಸಗೊಳಿಸಿದ ಘಟಕ (module)ವನ್ನು ಈ ಲೇಖನವು ವಿವರಿಸುತ್ತದೆ. ಇದರ ಜೊತೆಗೆ, ಅದು ದೇಹ ಮತ್ತು ಲೈಂಗಿಕತೆಗೆ ಸಂಬಂಧಿಸಿದಂತೆ ತಮ್ಮ ತಿಳುವಳಿಕೆಯನ್ನು ವಿದ್ಯಾರ್ಥಿಗಳು ನಿರಾತಂಕವಾಗಿ ವ್ಯಕ್ತಪಡಿಸುವುದನ್ನು ಉತ್ತೇಜಿಸುವ ಉದ್ದೇಶವನ್ನು ಹೊಂದಿತ್ತು – ಅಂದರೆ ಅವುಗಳ ಸುತ್ತ ಸಂಭಾಷಣೆಗಳನ್ನು ಸಹಜವಾಗಿಸುವ ಹಾಗೂ ಸಂಬಂಧಿತ ಪೂರ್ವಗ್ರಹ, ಮುಜುಗರ ಮತ್ತು ಸಿದ್ಧಮಾದರಿಗಳ ಆವರ್ತವನ್ನು ಮುರಿಯುವ ಉದ್ದೇಶವನ್ನು ಹೊಂದಿತ್ತು. ಶಿಕ್ಷಕರು–ವಿದ್ಯಾರ್ಥಿಗಳು ಸೇರಿ ರಚಿಸಿಕೊಂಡ ಒಂದು ಗುಂಪಾಗಿ ನಾವು ಸಾಮಾಜಿಕ ರೂಢಿಗಳು, ಸೌಂದರ್ಯ ಮತ್ತು ಸಂಬಂಧಗಳ ಕುರಿತಾದ ನಮ್ಮ ಕಲ್ಪನೆಗಳನ್ನು, ಹಾಗೂ ಮಾಧ್ಯಮದ ಪ್ರಭಾವವನ್ನು ಪರಿಶೀಲಿಸಿದ್ದೇವೆ. ನಮ್ಮ ಅಜ್ಞಾನವನ್ನೂ ಸಹ ನಾವು ಮುಕ್ತವಾಗಿ ಹಂಚಿಕೊಂಡಿದ್ದೇವೆ.

ಈ ಘಟಕವನ್ನು ನಾನು ಇಂಗ್ಲಿಷ್ ಮಾಧ್ಯಮದ ಒಂದು ಖಾಸಗಿ ವಸತಿಶಾಲೆಯಲ್ಲಿ ಓದುವ 9ನೇ ತರಗತಿಯ ನಾಲ್ಕು ಶೈಕ್ಷಣಿಕ ಗುಂಪುಗಳಲ್ಲಿ ಕ್ರಮಾನುಸಾರವಾಗಿ ಬಳಸಿ ಚರ್ಚಿಸಲು ಪ್ರಯತ್ನಿಸಿದ್ದೇನೆ. ಪ್ರತಿ ಗುಂಪಿನಲ್ಲೂ ಹುಡುಗರು ಹುಡುಗಿಯರು ಇಬ್ಬರೂ ಸೇರಿದಂತೆ 50 ವಿದ್ಯಾರ್ಥಿಗಳಿದ್ದು, ಅವರನ್ನು ಎರಡು ವಿಭಾಗಗಳಾಗಿ ವಿಂಗಡಿಸಲಾಗಿತ್ತು. ಈ ಘಟಕವನ್ನು ಸಂಪೂರ್ಣವಾಗಿ ಚರ್ಚಿಸಲು ಪ್ರತಿಯೊಂದು ಗುಂಪಿಗೂ 12 ಘಂಟೆಗಳನ್ನು ಮೀಸಲಿಡಲಾಗಿತ್ತು. ಈ ಲೇಖನವು ಅಳವಡಿಸಿದ ಸಾಮಾನ್ಯ ವಿಧಾನಗಳನ್ನು ಮತ್ತು ಈ ನಾಲ್ಕೂ ಗುಂಪುಗಳ ವಿದ್ಯಾರ್ಥಿಗಳಿಂದ ಬಂದಂತಹ ಅವಲೋಕನಗಳನ್ನು ಸಂಕ್ಷೇಪಿಸುತ್ತದೆ.

## ಸಂಕೋಚ ಬಿಡಿಸುವುದು

ಈ ವಿಷಯದ ಕುರಿತು ಇರುವಂತಹ ಸಂಕೋಚವನ್ನು ಬಿಡಿಸಲು ನಾನು ಬಳಸುವ ಒಂದು ಸರಳವಾದ ವಿಧಾನವೆಂದರೆ, ಕಪ್ಪು ಹಲಗೆಯ ಮೇಲೆ ದಪ್ಪ ಅಕ್ಷರಗಳಲ್ಲಿ 'ಮಾನವ ಸಂತಾನೋತ್ಪತ್ತಿ' ಎನ್ನುವ ಪದಗಳನ್ನು ಬರೆದು, ಖಾಲಿ ಹಾಳೆಗಳನ್ನು ವಿದ್ಯಾರ್ಥಿಗಳಿಗೆ ಕೊಡುವುದು. ನಂತರ ನಾನು, "ಮಾನವರಲ್ಲಿ ಸಂತಾನೋತ್ಪತ್ತಿ ವಿಷಯದ ಕುರಿತು ನಿಮಗೆ ಯಾವುದೇ ಪ್ರಶ್ನೆಗಳಿದ್ದರೂ ಹಂಚಿಕೊಳ್ಳಿ. ಪ್ರಶ್ನೆಗಳು ಅನಾಮಧೇಯವಾಗಿರಬಹುದು. ನಾನು ನಿಮ್ಮ ಪ್ರತಿಯೊಂದು ಪ್ರಶ್ನೆಯನ್ನು ಓದುತ್ತೇನೆ. ನನಗೆ ಉತ್ತರ ಗೊತ್ತಿದ್ದರೆ, ಅದನ್ನು ನಿಮ್ಮೊಂದಿಗೆ ಹಂಚಿಕೊಳ್ಳುತ್ತೇನೆ. ನನಗೆ ಉತ್ತರ ತಿಳಿದಿರದಿದ್ದರೆ, ನಾವು ಒಟ್ಟಿಗೆ ಉತ್ತರ ಕಂಡುಕೊಳ್ಳಲು ಪ್ರಯತ್ನಿಸೋಣ" ಎಂದು ಹೇಳುತ್ತೇನೆ.

5–10 ನಿಮಿಷಗಳ ನಂತರ, ನಾನು ಅವರನ್ನು ಮತ್ತಷ್ಟು ಪ್ರೋತ್ಸಾಹಿಸುತ್ತೇನೆ: "ಬೆಳವಣಿಗೆ, ಲೈಂಗಿಕತೆ, ಅಶ್ಲೀಲಚಿತ್ರಗಳು, ಲಿಂಗತ್ವ, ಬಸಿರು, ಮುಷ್ಟಿಮೈಥುನ ಮುಂತಾದವುಗಳ ಕುರಿತು ಪ್ರಶ್ನೆಗಳನ್ನು ಕೇಳಲು ನಿಮಗೆ ಇದೊಂದು ಅದ್ಭುತವಾದ ಅವಕಾಶವಾಗಿರಬಹುದು ಎಂದು ತಿಳಿಯಿರಿ. ಅಂತರ್ಜಾಲದಲ್ಲಿ ಗೊತ್ತುಗುರಿಯಿಲ್ಲದೆ ಹುಡುಕಾಡುತ್ತಾ ಪ್ರಾಯಶಃ ಗೊಂದಲಮಯವಾದ ಉತ್ತರಗಳನ್ನೋ ಅಥವಾ ಮುಂದಿನ ಹೆಜ್ಜೆ ಕಾಣದ ಸ್ಥಿತಿಯನ್ನೋ ತಲುಪುವುದರ ಬದಲು ಇಲ್ಲಿ ನಿಮಗೆ ಉಪಯುಕ್ತವಾದ ಉತ್ತರಗಳು ಸಿಗಬಹುದು. ದಯವಿಟ್ಟು ನಿಮಗೆ ಕೇಳಬೇಕೆನಿಸಿದ ಯಾವುದೇ ಪ್ರಶ್ನೆಯನ್ನು ಕೇಳಲು ಈ ಅವಕಾಶವನ್ನು ಬಳಸಿಕೊಳ್ಳಿ."

### ಬಾಕ್ಸ್ 1 : ವಿದ್ಯಾರ್ಥಿಗಳಿಂದ ಬಂದ ಮಾದರಿ ಪ್ರಶ್ನೆಗಳು

ಇದು 2016 ರಿಂದ – 2020 ರವರೆಗಿನ ಅವಧಿಯಲ್ಲಿ ವಿದ್ಯಾರ್ಥಿಗಳಿಂದ ಬಂದಂತಹ ಪ್ರಶ್ನೆಗಳ ಸಂಗ್ರಹದಿಂದ ಆಯ್ಕೆ ಮಾಡಲಾದ ಪ್ರಶ್ನೆಗಳ ಒಂದು ಮಾದರಿ. ಅವುಗಳಲ್ಲಿ ಕೆಲವು ಪ್ರಶ್ನೆಗಳು, ಅವುಗಳಿಗೆ ಕೊಡಲಾದ ಉತ್ತರಗಳೊಂದಿಗೆ, ಸವಾಲಿರಾಮ್ ಜಾಲತಾಣದಲ್ಲಿ ಲಭ್ಯವಿದೆ (https://sawaliram.org/search).

- ಮುಟ್ಟು ಏಕೆ ನೋವನ್ನುಂಟುಮಾಡುತ್ತದೆ?
- ಮುಟ್ಟನ್ನು ಏಕೆ ನಿಷಿದ್ಧವಾದದ್ದೆಂದು ಪರಿಗಣಿಸುತ್ತಾರೆ? ಅಂಗಡಿಗಳಲ್ಲಿ ಏಕೆ ಸ್ಯಾನಿಟರಿ ನ್ಯಾಪ್ಕಿನ್ ಗಳನ್ನು ಕಾಗದಗಳಲ್ಲಿ ಸುತ್ತಿ ಅಥವಾ ಕಪ್ಪು ಪ್ಲ್ಯಾಸ್ಟಿಕ್ ಚೀಲದಲ್ಲಿ ಹಾಕಿ ಕೊಡುತ್ತಾರೆ?
- ಬಟ್ಟೆಯ ಪ್ಯಾಡ್ ಗಳು ಅಥವಾ ಸ್ಯಾನಿಟರಿ ಪ್ಯಾಡ್ ಗಳಿಗೆ ಮುಂಚೆ ಮಹಿಳೆಯರು ಮುಟ್ಟಿನ ಸ್ರಾವವನ್ನು ಹೇಗೆ ನಿಭಾಯಿಸುತ್ತಿದ್ದರು?
- ಮಹಿಳೆಯು ಮುಟ್ಟಾಗದಿರುವುದಕ್ಕೆ ಬಸಿರಿನ ಹೊರತು ಬೇರೆ ಯಾವುದಾದರೂ ಕಾರಣಗಳಿವೆಯೇ?
- ಕೆಲವರಿಗೆ ಋತುಚಕ್ರ 10 ವರ್ಷ ವಯಸ್ಸಿಗೆ ಪ್ರಾರಂಭವಾದರೆ, ಕೆಲವರಿಗೆ ಇನ್ನೂ ತಡವಾಗುತ್ತದೆ ಏಕೆ?
- ಸಾಮಾನ್ಯವಾಗಿ ಮಹಿಳೆಯರು ಅವರು 20 ವರ್ಷ ತಲುಪಿದ ನಂತರವೇ ಮಕ್ಕಳಿಗೆ ಜನ್ಮ ಕೊಡುತ್ತಾರಾದರೂ, ಏಕೆ 10–12 ವರ್ಷ ವಯಸ್ಸಿಗಾಗಲೇ ಮುಟ್ಟಾಗಲು ಪ್ರಾರಂಭಿಸುತ್ತಾರೆ?
- ಮಹಿಳೆಯ ದೇಹದ ಭಾಗಗಳನ್ನು ಅವಹೇಳನಕಾರಿ ಪದಗಳು ಎಂದು ಹೇಳಲಾಗುತ್ತದೆ ಏಕೆ?
- ಹೆಣ್ಣುಮಕ್ಕಳು ದೊಡ್ಡ ಗಾತ್ರದ ಶಿಶ್ನಗಳಿಂದ ಆಕರ್ಷಿತರಾಗುತ್ತಾರೆಯೇ?
- ಹದಿಹರೆಯದಲ್ಲಿ ಗಂಡುಮಕ್ಕಳು ಎತ್ತರಕ್ಕೆ ಬೆಳೆಯುತ್ತಾರೆ ಆದರೆ ಹೆಣ್ಣುಮಕ್ಕಳು ಹಾಗೆ ಏಕೆ ಬೆಳೆಯುವುದಿಲ್ಲ?
- ಪುರುಷರಿಗೂ ಋತುಬಂಧ ಆಗುತ್ತದೆಯೇ ಹಾಗೂ ಅವರು ಸಂತಾನೋತ್ಪತ್ತಿಯ ಸಾಮರ್ಥ್ಯವನ್ನು ಕಳೆದು–ಕೊಳ್ಳುತ್ತಾರೆಯೇ?
- ಭಾರತೀಯ ಟಿವಿಗಳು ಮಹಿಳೆಯರ ಒಳಉಡುಪುಗಳನ್ನು (ಬ್ರಾಗಳಂತಹವುಗಳನ್ನು) ಮಸುಕು ಮಾಡುತ್ತವೆ, ಪುರುಷರ ಒಳಉಡುಪುಗಳನ್ನು ಮಸುಕು ಮಾಡುವುದಿಲ್ಲ ಏಕೆ?
- ಮೊದಲನೆಯ ಸಲ ಸಂಭೋಗ ಮಾಡಿದಾಗ ನೋವಾಗುತ್ತದೆಯೇ?
- ಸಂಭೋಗಕ್ಕೆ ಜನರು ಏಕೆ ಗೀಳು ಬೆಳೆಸಿಕೊಳ್ಳುತ್ತಾರೆ?
- ಕಾಂಡೋಮ್ ಗಳನ್ನು ಹೇಗೆ ವಿಲೇವಾರಿ ಮಾಡುತ್ತಾರೆ?
- ಒಬ್ಬ ಗಂಡಸು ಮತ್ತು ಹೆಂಗಸು ಅಸುರಕ್ಷಿತವಾದ ಸಂಭೋಗ ನಡೆಸಿದರೆ, ಅದು ಗರ್ಭಾಧಾನಕ್ಕೆ ಎಡೆಮಾಡಿಕೊಡುತ್ತದೆಯೇ?
- ಮಹಿಳೆಯರು ಬಳಸುವ ಮಾರ್ನಿಂಗ್ ಆಫ್ಟರ್ ಪಿಲ್ಸ್ (ಗರ್ಭಧಾರಣೆಯನ್ನು ತಡೆಯಲು) ಎಂದು ಕರೆಯಲಾಗುವ ಮಾತ್ರೆಗಳು ಹಾನಿಕಾರಕವೇ?
- ಪ್ರಸವದ ಸಮಯದಲ್ಲಿ ಏನಾಗುತ್ತದೆ?
- ಸಿ–ಸೆಕ್ಷನ್ ಎಂದರೆ ಏನು?
- ಜನರು ಏಕೆ ಮುಷ್ಟಿಮೈಥುನ ಮಾಡಿಕೊಳ್ಳುತ್ತಾರೆ ಮತ್ತು ಅದನ್ನು ಏಕೆ ನಿಷಿದ್ಧ ವರ್ತನೆ ಎಂದು ಪರಿಗಣಿಸಲಾಗುತ್ತದೆ?
- ಜನರು ಮುಷ್ಟಿಮೈಥುನ ಮಾಡಿಕೊಂಡಾಗ, ಅದು ಅವರಿಗೆ ಯಾವ ರೀತಿಯ ಆನಂದ ಕೊಡುತ್ತದೆ?
- ಜನರು ಅಶ್ಲೀಲಚಿತ್ರಗಳನ್ನು ಏಕೆ ನೋಡುತ್ತಾರೆ? ಅವರಿಗೆ ಅದನ್ನು ಏಕೆ ನೋಡಬೇಕೆನಿಸುತ್ತದೆ?
- ಮನುಷ್ಯರು ಲೈಂಗಿಕ ಸಂಬಂಧಿ ಆಕರ್ಷಣೆಗಳನ್ನು ಅಥವಾ ಬಯಕೆಗಳನ್ನು ಏಕೆ ವ್ಯಕ್ತಪಡಿಸುತ್ತಾರೆ?
- ಸಂವೇಗಗಳನ್ನು ಹಾಗೂ ಮನೋಲಹರಿಯ ಏರುಪೇರುಗಳನ್ನು ದೇಹ ಹೇಗೆ ನಿಯಂತ್ರಿಸುತ್ತದೆ?
- ಇತರ ಜೀವಿಗಳು ತಮ್ಮ ಲಿಂಗತ್ವವನ್ನು ಹೇಗೆ ಬದಲಾಯಿಸಿಕೊಳ್ಳುತ್ತವೆ?

ಸಾಮಾನ್ಯವಾಗಿ, ಪ್ರಾರಂಭದಲ್ಲಿ ವಿದ್ಯಾರ್ಥಿಗಳಲ್ಲಿ ಸಂಕೋಚ ಕಂಡುಬರುತ್ತದೆ: ಅಣಕಿಸುತ್ತಾರೆ, ನಗುತ್ತಾರೆ, ಹಾಗೂ ತಮಗೆ ಯಾವುದೇ ಪ್ರಶ್ನೆಗಳಿಲ್ಲ ಎಂದು ನನಗೆ ಸಾಮಾನ್ಯವಾಗಿ ತಪ್ಪದೇ ಹೇಳುತ್ತಾರೆ. ಆದಾಗ್ಯೂ, ಇಷ್ಟು ವರ್ಷಗಳಲ್ಲಿ ನಾನು ನೋಡಿರುವಂತೆ, ಸಾಕಷ್ಟು ಸಮಯ ಕೊಟ್ಟಾಗ (ಈ ಚಟುವಟಿಕೆಗೆ ನಾನು ಒಂದು ತರಗತಿಯ ಅವಧಿಯಾದ 60 ನಿಮಿಷಗಳನ್ನು ಸಂಪೂರ್ಣವಾಗಿ ಮೀಸಲಿಡುತ್ತೇನೆ), ವಿದ್ಯಾರ್ಥಿಗಳಿಂದ ಹಲವಾರು ಪ್ರಶ್ನೆಗಳು ಹೊರಹೊಮ್ಮಲಾರಂಭಿಸುತ್ತವೆ (ನೋಡಿ ಚಿತ್ರ 1). ಹಾಗೆ ನೋಡಿದರೆ, ಒಂದು ಸಲ ನಾನು ಒಂದೇ ಗುಂಪಿನಿಂದ 260ರಷ್ಟು ಪ್ರಶ್ನೆಗಳನ್ನು ಪಡೆದಿದ್ದೆ! ತರಗತಿಯ ನಂತರ ನನಗೆ ಖುದ್ದಾಗಿ ವಿದ್ಯಾರ್ಥಿಗಳು ಮತ್ತಷ್ಟು ಪ್ರಶ್ನೆಗಳನ್ನು ಬರೆದು ಕೊಟ್ಟಂತಹ ಸಂದರ್ಭಗಳೂ ಸಹ ಇವೆ (ನೋಡಿ ಬಾಕ್ಸ್1).




**ಚಿತ್ರ 1:** ಸಂಕೋಚ ಬಿಡಿಸುವ ಪ್ರಶ್ನೆಗೆ ವಿದ್ಯಾರ್ಥಿಗಳಿಂದ ಬಂದ ಪ್ರತಿಕ್ರಿಯೆಗಳ ಒಂದು ತೇಪಣೆ
ಕೃಪೆ: Dhanya K. ಪರವಾನಗಿ: CC-BY-NC.

ಪ್ರಶ್ನೆಗಳನ್ನು ಬೇರ್ಪಡಿಸಿಕೊಳ್ಳುವುದರಿಂದ ನಾನು ನನ್ನ ಕೆಲಸವನ್ನು ಪ್ರಾರಂಭಿಸುತ್ತೇನೆ; ಅಂದರೆ ಸ್ವತಃ ಸಂಭೋಗಕ್ಕೆ ಸಂಬಂಧಿಸಿದ ನಿಖರವಾದ ಕಾರ್ಯ ರೀತಿ ಅಥವಾ ವಿವರಗಳಂತಹ ಪ್ರಶ್ನೆಗಳನ್ನು, ಒಂದೋ ನನ್ನದೇ ಆದ ಮುಜುಗರ ಅಥವಾ ವಿದ್ಯಾರ್ಥಿಗಳ ವಯಸ್ಸಿಗೆ ಸೂಕ್ತವಲ್ಲ ಎಂಬ ಕಾರಣಕ್ಕಾಗಿ ತರಗತಿಯಲ್ಲಿ ಚರ್ಚಿಸುವ ಉದ್ದೇಶವನ್ನು ನಾನು ಹೊಂದಿರದಂತಹ ಪ್ರಶ್ನೆಗಳನ್ನು ಬೇರ್ಪಡಿಸಿಕೊಳ್ಳುತ್ತೇನೆ. ಉಳಿದ ಪ್ರಶ್ನೆಗಳನ್ನು ಪರಿಣಾಮಕಾರಿಯಾಗಿ ಉದ್ದೇಶಿಸುವ ದೃಷ್ಟಿಯಿಂದ, ನಾನು ಅವುಗಳನ್ನು ಬೇರೆ ಬೇರೆ ಪ್ರವರ್ಗಗಳಲ್ಲಿ ವಿಂಗಡಿಸಿಕೊಳ್ಳುತ್ತೇನೆ, ಉದಾಹರಣೆಗೆ ದೇಹ / ಅಂಗರಚನೆ, ಬಸಿರು, ಸಂಭೋಗ, ಅಶ್ಲೀಲಚಿತ್ರಗಳು ಇತ್ಯಾದಿಗಳು. ಈ ಪ್ರಶ್ನೆಗಳಿಗೆ ಕರಾರುವಾಕ್ಕಾದ ಉತ್ತರಗಳನ್ನು ಪುಸ್ತಕಗಳಿಂದ, ಅಂತರ್ಜಾಲದಿಂದ, ಸಮಾನಸ್ಥರಿಂದ (ಇತರ ಶಿಕ್ಷಕರು), ಅಥವಾ ವೈದ್ಯರುಗಳಿಂದ ಕಂಡುಕೊಳ್ಳಲು ನಾನು ಒಂದು ವಾರ ಅಥವಾ ಎರಡು ವಾರ ಸಮಯ ತೆಗೆದು–ಕೊಳ್ಳುತ್ತೇನೆ. ಮುಂದಿನ ತರಗತಿಗೆ ಮಾನಸಿಕವಾಗಿ ಸಿದ್ಧವಾಗಲೂ ಸಹ ನಾನು ಈ ಅವಧಿಯನ್ನು ಬಳಸಿಕೊಳ್ಳುತ್ತೇನೆ. ಉದಾಹರಣೆಗೆ, ಈ ಪ್ರಶ್ನೆಗಳಿಗೆ ಉತ್ತರಿಸುವಾಗ ಪೂರ್ವಾಗ್ರಹವಿಲ್ಲದ ಧ್ವನಿ ಅಥವಾ ದೇಹ ಭಾಷೆಯನ್ನು ನಾನು ಬಳಸುವಂತೆ ಕಾಳಜಿ ವಹಿಸುತ್ತೇನೆ. ವಿದ್ಯಾರ್ಥಿಗಳೊಂದಿಗೆ ನಾನು ದಾಟಬಾರದಂತ ಮಿತಿಗಳನ್ನೂ ಸಹ ನಾನು ಪುನರಾವಲೋಕನ ಮಾಡಿಕೊಳ್ಳುತ್ತೇನೆ.

## ವಿದ್ಯಾರ್ಥಿಗಳೊಂದಿಗೆ ಪ್ರಶ್ನೆಗಳನ್ನು ಪರಿಶೋಧಿಸುವುದು

### (ಎ) ಬರೆಯುತ್ತಾ ಮಾತನಾಡುವುದು

ಸಾಮಾನ್ಯವಾಗಿ, ಮಾನವ ಅಂಗರಚನೆಗೆ ಸಂಬಂಧಿಸಿದ ಪ್ರಶ್ನೆಗಳಿಂದ ನಾನು ಪ್ರಾರಂಭಿಸುತ್ತೇನೆ. ಗಂಡು ಮತ್ತು ಹೆಣ್ಣಿನ ಜನನಾಂಗಗಳನ್ನು ಒಂದು ಭಿತ್ತಿ ಚಿತ್ರ ಅಥವಾ ಪವರ್ ಪಾಯಿಂಟ್ ಪ್ರಸ್ತುತಿ ಬದಲು, ನಾನು ಕಪ್ಪು ಹಲಗೆಯ ಮೇಲೆ ಅವುಗಳನ್ನು ಚಿತ್ರಿಸುತ್ತೇನೆ ಹಾಗೂ ತಮ್ಮತಮ್ಮ ಪುಸ್ತಕಗಳಲ್ಲಿ ಈ ಚಿತ್ರಗಳನ್ನು ಬಿಡಿಸಬೇಕೆಂದು ವಿದ್ಯಾರ್ಥಿಗಳನ್ನು ಉತ್ತೇಜಿಸುತ್ತೇನೆ. ಅವರು ಚಿತ್ರ ಬಿಡಿಸುತ್ತಿರುವಾಗ, ಅವರ ವರ್ತನೆ ಮತ್ತು ಧೋರಣೆಗಳನ್ನು ಗಮನಿಸಲು ನಾನು ತರಗತಿಯಿಡೀ ಓಡಾಡುತ್ತೇನೆ. ಆಶ್ಚರ್ಯಕರವಾಗಿ, ನಾನು ಕಪ್ಪುಹಲಗೆಯ ಮೇಲೆ ಚಿತ್ರ ಬರೆಯಲು ಪ್ರಾರಂಭಿಸಿದಾಗ ವಿದ್ಯಾರ್ಥಿಗಳಲ್ಲಿ ಕಂಡುಬರುವಂತಹ ಕಸಿವಿಸಿಯು ಸ್ವತಃ ಅವರೇ ಚಿತ್ರ ಬರೆಯಲು ಪ್ರಾರಂಭಿಸಿದಾಗ ಮಾಯವಾಗುತ್ತದೆ ಮತ್ತು ಅವರು ಆರಾಮವಾಗಿರುವುದನ್ನು ಕಂಡುಬರುತ್ತದೆ. ಕೈಯಾರೆ ಚಿತ್ರ ಬಿಡಿಸುವ ಕ್ರಿಯೆ ಪ್ರಜನನ ಅಂಗಗಳಿಗೆ ಸಂಬಂಧಿಸಿದಂತೆ ಇರುವ ಕೆಲವು ಕಳಂಕಗಳನ್ನು ತೊಡೆದುಹಾಕಲು ನೆರವಾಗಬಹುದು.

ವಿದ್ಯಾರ್ಥಿಗಳು ತಮ್ಮ ಪುಸ್ತಕದಲ್ಲಿ ಚಿತ್ರಗಳನ್ನು ಬರೆದು ಮುಗಿಸಿದ ಮೇಲೆ, ನಾನು ಪ್ರಜನನ ವ್ಯವಸ್ಥೆಯ ಪ್ರತಿಯೊಂದು ಭಾಗವನ್ನೂ ಹೆಸರಿಸುತ್ತೇನೆ, ಅವುಗಳ ಹೆಸರುಗಳ ವ್ಯುತ್ಪತ್ತಿಯನ್ನು ಹಂಚಿಕೊಳ್ಳುತ್ತೇನೆ, ಹಾಗೂ ಆ ಭಾಗಗಳ ಕಾರ್ಯಗಳನ್ನು ವಿವರಿಸುತ್ತೇನೆ. ಮಾನವ ಹೃದಯದ ಕುರಿತು ಅಥವಾ ಒಂದು ಎಲೆಯ ರಚನೆಯ ಕುರಿತು ಯಾವ ಧ್ವನಿಯಲ್ಲಿ ಹಾಗೂ ಯಾವ ರೀತಿಯಲ್ಲಿ ಪಾಠ ಮಾಡುತ್ತೇನೋ ಅದೇ ಧ್ವನಿಯಲ್ಲಿ, ಅದೇ ರೀತಿಯಲ್ಲಿ ಈ ವಿಷಯದ ಕುರಿತು ಪಾಠವನ್ನು ಮಾಡುತ್ತೇನೆ. ಈ ಅಭ್ಯಾಸಕ್ರಮದಿಂದಾಗಿ ಪ್ರಜನನ ಅಂಗಗಳ ಬಗ್ಗೆ ಕಲಿಯುವ ಪ್ರಕ್ರಿಯೆಯು ಬೇರೆ ಯಾವುದೇ ಅಂಗಭಾಗದ ಕುರಿತು ಕಲಿಯುವ ಪ್ರಕ್ರಿಯೆಯಂತೆಯೇ ಎಂದು ವಿದ್ಯಾರ್ಥಿಗಳು ಅರ್ಥಮಾಡಿಕೊಳ್ಳಲು ನೆರವಾಗುತ್ತದೆ. ಪ್ರಜನನ ವ್ಯವಸ್ಥೆಯ ರಚನೆ ಹಾಗೂ ಶರೀರ ವಿಜ್ಞಾನಕ್ಕೆ ಸಂಬಂಧಿಸಿದ ಹಲವಾರು ಪ್ರಶ್ನೆಗಳಿಗೆ ಈ ವಿಧಾನದಿಂದ ಉತ್ತರ ಕಂಡುಕೊಳ್ಳಬಹುದು. ತರಗತಿಯು ಕೊನೆಗೊಳ್ಳುವಾಗ, ವಿದ್ಯಾರ್ಥಿಗಳ ಯಾವ ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಳ್ಳಲಾಯಿತು ಎನ್ನುವುದನ್ನೂ ಓದಿ ಹೇಳುತ್ತೇನೆ. (ನೋಡಿ ಬಾಕ್ಸ್ 2).

**ಬಾಕ್ಸ್ 2: ಕಪ್ಪು ಹಲಗೆಯ ಮೇಲೆ ಬರೆದು ತೋರಿಸುವ ಅವಧಿಯಲ್ಲಿ ಎತ್ತಿಕೊಳ್ಳಲಾದ ಮಾದರಿ ಪ್ರಶ್ನೆಗಳು ಹಾಗೂ ಅನುಸರಿಸಲಾದ ವಿಧಾನಗಳು**

### ಪ್ರಶ್ನೆ: ಜನನಗ್ರಂಥಿಗಳು (gonad - ವೃಷಣ ಅಥವಾ ಅಂಡಾಶಯ) ಎಂದರೆ ಏನು?

ಈ ಪ್ರಶ್ನೆಯನ್ನು ನಾನು ಪ್ರಜನನ ವ್ಯವಸ್ಥೆಯ ಅಂಗರಚನೆ ಹಾಗೂ ಶರೀರವಿಜ್ಞಾನಕ್ಕೆ ಸಂಬಂಧಿಸಿದ ಪ್ರಶ್ನೆ ಎಂದು ಪರಿಗಣಿಸಿ, ಕಪ್ಪು ಹಲಗೆಯ ಮೇಲೆ ಚಿತ್ರಗಳನ್ನು ಬಿಡಿಸುವ ಮೂಲಕ ಉತ್ತರಿಸಿದೆ. ಜನನಗ್ರಂಥಿಗಳು ಕೇವಲ ಗಂಡಸಿನ ದೇಹದಲ್ಲಿ ಮಾತ್ರ ಇರುವಂಥದ್ದು ಎಂಬ ಸಾಮಾನ್ಯ ತಪ್ಪು ತಿಳುವಳಿಕೆಯ ಕುರಿತೂ ಸ್ಪಷ್ಟಪಡಿಸಿದೆ. ಕೆಲವು ಸಲ, ಈ ಕೆಳಗಿನ ಪಾಡ್ ಕ್ಯಾಸ್ಟ್ ನ ಕೆಲವು ಭಾಗಗಳನ್ನೂ ಸಹ ಕೇಳಿಸಿಕೊಳ್ಳುತ್ತಿದ್ದೆವು: https://www.wnycstudios.org/series/radiolab-presents-gonads.

ಪ್ರಶ್ನೆ. ವೀರ್ಯಾಣುವು ಎಲ್ಲಿ ಮತ್ತು ಹೇಗೆ ಉತ್ಪತ್ತಿಯಾಗುತ್ತದೆ? ಸಂಭೋಗ ನಡೆದಾಗ ವೀರ್ಯಾಣುವು ಎಲ್ಲಿಗೆ ತಲುಪುತ್ತದೆ? ಎಲ್ಲಿಗೆ ತಲುಪಬೇಕು ಎಂಬುದು ವೀರ್ಯಾಣುವಿಗೆ ಹೇಗೆ ತಿಳಿಯುತ್ತದೆ?

ಈ ಪ್ರಶ್ನೆಗಳಿಗೆ ಉತ್ತರಿಸಲು ಕಪ್ಪು ಹಲಗೆಯ ಮೇಲೆ ಬರೆದಿರುವ ಚಿತ್ರಗಳ ಜೊತೆಗೆ, ಕೆಲವು ವಿಡಿಯೋ ಸಂಪನ್ಮೂಲಗಳನ್ನೂ ಸಹ ನಾನು ಬಳಸಿಕೊಂಡೆ. ಅವುಗಳೆಂದರೆ:

- ಮಾನವ ವೀರ್ಯಾಣುವಿನ ಚಲನೆಯ ಭೌತಶಾಸ್ತ್ರದ ಕುರಿತಾದ ವಿಡಿಯೋ: https://www.ted.com/talks/aatish_bhatia_the_physics_of_human_sperm_vs_the_physics_of_the_sperm_whale.
- ಮಾನವ ವೀರ್ಯಾಣುವಿನ ಸೂಕ್ಷ್ಮದರ್ಶಕ ವೀಕ್ಷಣೆ: https://youtu.be/JQ5RvbjWFtQ.

### ಪ್ರಶ್ನೆ: ಶಿಶ್ನದ ನಿಮಿರುವಿಕೆ ಹೇಗೆ ಆಗುತ್ತದೆ?

ಇಲ್ಲಿ ನಾನು ನರಮಂಡಲದ ವ್ಯವಸ್ಥೆ, ಮಾಂಸಖಂಡಗಳು, ಹಾಗೂ ರಕ್ತನಾಳಗಳ ರಚನೆ ಹಾಗೂ ಅವುಗಳು ಹೇಗೆ ಕೆಲಸ ಮಾಡುತ್ತವೆ ಎನ್ನುವುದನ್ನು ವಿವರಿಸಿದೆ. ಈ ವಿಷಯಗಳು ಜೀವಶಾಸ್ತ್ರದ ಪಠ್ಯಕ್ರಮದಲ್ಲಿನ ಇತರ ಅಧ್ಯಾಯಗಳ ವಿಷಯಗಳೊಂದಿಗೆ ಅತಿವ್ಯಾಪಿಸುವುದರಿಂದ, ವಿದ್ಯಾರ್ಥಿಗಳು ಈ ತರಗತಿಗೆ ಹಾಗೂ ದರ್ಜೆಗೆ ಬರುವುದಕ್ಕೂ ಮೊದಲು ಕಲಿತಿರುವ ವಿಷಯಗಳೊಂದಿಗೆ ಸಂಬಂಧಿಸಿ ಹೇಳಿಕೊಡಲು ನನಗೆ ಸಾಧ್ಯವಾಯಿತು.

ಪ್ರಶ್ನೆ. ಲೈಂಗಿಕ ಕ್ರಿಯೆಯ ನಂತರ ಒಬ್ಬ ಮಹಿಳೆಗೆ ಗರ್ಭ ಧರಿಸಲು ಎಷ್ಟು ಸಮಯ ತೆಗೆದುಕೊಳ್ಳುತ್ತದೆ? ಲೈಂಗಿಕ ಕ್ರಿಯೆಯಲ್ಲಿ ತೊಡಗಿದ ಮೇಲೆ ಗರ್ಭ ಧರಿಸುವ ಸಾಧ್ಯತೆ ಎಷ್ಟಿರುತ್ತದೆ?

ಋತುಚಕ್ರವನ್ನು ಪರಿಚಯಿಸಲು ಈ ರೀತಿಯ ಪ್ರಶ್ನೆಗಳನ್ನು ಎತ್ತಿಕೊಳ್ಳಲಾಯಿತು. ಇಲ್ಲಿ ಬಳಸಬಹುದಾದ ಒಂದು ವಿಡಿಯೋ ಸಂಪನ್ಮೂಲವೆಂದರೆ: https://youtu.be/ayzN5f3qN8g.

### ಪ್ರಶ್ನೆ: ಕಾಂಡೋಮ್ಸ್ ಎಂದರೆ ಏನು? ಅವು ಹೇಗೆ ಒಡೆಯುತ್ತವೆ?

ಗರ್ಭ ನಿರೋಧಕಗಳ ಕುರಿತು ಇರುವ ಈ ವಿಡಿಯೋ ಅನ್ನು ವಿದ್ಯಾರ್ಥಿಗಳ ಜೊತೆಗೆ ಹಂಚಿಕೊಂಡ ನಂತರ ಈ ಪ್ರಶ್ನೆಯನ್ನು ನಾನು ಚರ್ಚಿಸುತ್ತೇನೆ: https://www.youtube.com/watch?v=Zx8zbTMTncs.

ನಾವು ಹೆಂಗಸರು ಬಳಸುವ ಗರ್ಭನಿರೋಧಕಗಳ ಕುರಿತು ಸಹ ಸುದೀರ್ಘವಾಗಿ ಚರ್ಚಿಸುತ್ತೇವೆ. ಕೆಲವಷ್ಟೇ ಕಾಂಡೋಮ್ಸ್ ಮಹಿಳೆಯರಿಗಾಗಿ ಇರುವುದು ಏಕೆ ಎನ್ನುವುದನ್ನು ತೋರಿಸಲು ಈ ವಿಡಿಯೋ ಅನ್ನು ಅವರೊಂದಿಗೆ ಹಂಚಿಕೊಳ್ಳುತ್ತೇನೆ: https://youtu.be/6XxA-4Jp7AU.

ನಂತರ, ಕಾಂಡೋಮ್ ಅನ್ನು ಹೇಗೆ ಬಳಸಬೇಕು ಎಂಬುದರ ಕುರಿತಾದ ಈ ಶೈಕ್ಷಣಿಕ ವಿಡಿಯೋ ಅನ್ನು ನಾನು ಹಂಚಿಕೊಳ್ಳುತ್ತೇನೆ: https://www.youtube.com/watch?v=06kT9yfj7QE.

ಈ ಸಂದರ್ಭದಲ್ಲಿ ಲೈಂಗಿಕ ಕ್ರಿಯೆಗೆ ಒಪ್ಪಿಗೆಯ ವಿಷಯವನ್ನೂ ಸಹ ನಾನು ಈ ವಿಡಿಯೋ ಮೂಲಕ ಪರಿಚಯಿಸುತ್ತೇನೆ: https://www.youtube.com/watch?v=pZwvrxVavnQ.

### ಪ್ರಶ್ನೆ: ಪ್ರೌಢಾವಸ್ಥೆಯಲ್ಲಿ ಹುಡುಗರು ಯಾವ ಅನುಭವಗಳನ್ನು ಹೊಂದುತ್ತಾರೆ?

ಪ್ರೌಢಾವಸ್ಥೆಯಲ್ಲಿ ಕಂಡು ಬರುವ ಅನೇಕ ಬದಲಾವಣೆಗಳನ್ನು ನಾನು ಇಲ್ಲಿ ಚರ್ಚಿಸುತ್ತೇನೆ. ಇದರಿಂದಾಗಿ ಆ ಬದಲಾವಣೆಗಳು ಹಾಗೂ ಅವುಗಳಿಗೆ ಸಂಬಂಧಿಸಿದ ಸಂಭಾಷಣೆಗಳು ಸ್ವಾಭಾವಿಕವಾದದ್ದು ಎಂದು ಪರಿಗಣಿಸಲು ನೆರವಾಗುತ್ತದೆ. ಉದಾಹರಣೆಗೆ, ಸ್ವಪ್ನಸ್ಖಲನ ಅಥವಾ ಮುಟ್ಟಿನ ಕುರಿತು ಮುಕ್ತವಾಗಿ ಮಾತನಾಡುವುದರಿಂದ ಅದು ವಿದ್ಯಾರ್ಥಿಗಳಿಗೆ ಈ ಸಹಜ ಬದಲಾವಣೆಗಳು ಸ್ವಾಭಾವಿಕವಾದ ಪ್ರಕ್ರಿಯೆಗಳು ಎಂದು ಒಪ್ಪಿಕೊಳ್ಳಲು ಹಾಗೂ ಅವುಗಳ ಬಗ್ಗೆ ಮುಜುಗರ ಪಟ್ಟುಕೊಳ್ಳಬೇಕಾಗಿಲ್ಲ ಎಂಬುದನ್ನು ಅರಿಯಲು ನೆರವಾಗುತ್ತದೆ. ಈ ವಿಡಿಯೋ ಸಂಪನ್ಮೂಲವು ಈ ನಿಟ್ಟಿನಲ್ಲಿ ನೆರವಾಗಬಹುದು: https://www.youtube.com/watch?v=-XQcnO4iX_U.

ಈ ಗೋಷ್ಠಿಗಳಲ್ಲಿ ನಾನು ಚರ್ಚಿಸುತ್ತಿದ್ದ ಕೆಲವು ಮತ್ತೆ ಮತ್ತೆ ಕೇಳ ಬಂದಂತಹ ಪ್ರಶ್ನೆಗಳು ಹೀಗಿವೆ:

ಪ್ರ: ಮುಟ್ಟಿನ ದಿನಗಳಲ್ಲಿ ನಾವು ಏಕೆ ನೋವನ್ನು ಅನುಭವಿಸುತ್ತೇವೆ?
ಪ್ರ: ಪಿ ಎಮ್ ಎಸ್ (ಮುಟ್ಟಿನ ಪೂರ್ವ ಸಹಲಕ್ಷಣಗಳು) ಎಂದರೆ ಏನು?
ಪ್ರ: ಒಬ್ಬ ಮಹಿಳೆ ಗರ್ಭ ಧರಸಿರುವಳೆಂದು ಹೇಗೆ ತಿಳಿದು ಬರುತ್ತದೆ?
ಪ್ರ: ಹೆಂಗಸರಿಗೆ ಮುಟ್ಟು ಏಕೆ ನಿಲ್ಲುತ್ತದೆ? ಮುಟ್ಟು ನಿಂತ ಹೊತ್ತಿನಲ್ಲಿ ಅವರು ಗರ್ಭಧರಿಸುವುದು ಏಕೆ ಸಾಧ್ಯವೇ ಇಲ್ಲ?
ಪ್ರ: ಗಂಡಸರ ಜನನೇಂದ್ರಿಯ ಏಕೆ ಅಷ್ಟು ಸೂಕ್ಷ್ಮವಾಗಿರುತ್ತದೆ?
ಪ್ರ: ಕನ್ಯತ್ವ ಎಂದರೆ ಏನು, ಅದನ್ನು ಹೇಗೆ ಒಬ್ಬರು ಕಳೆದುಕೊಳ್ಳುತ್ತಾರೆ?

(ಬಿ) ಹೊರಾಂಗಣ ತರಗತಿ

ಕಪ್ಪುಹಲಗೆಯ ಮೇಲೆ ಬರೆದಿದ್ದನ್ನು ಬಳಸಿಕೊಂಡು ಚರ್ಚೆಯನ್ನು ನಡೆಸಿದ ನಂತರ, ಮುಂದಿನ ತರಗತಿಗಳನ್ನು ಸಾಮಾನ್ಯವಾಗಿ, ಮುಕ್ತ ಪ್ರದೇಶಗಳು ಹೆಚ್ಚು ಅನಿರ್ಬಂಧಿತವಾಗಿರುವುದರಿಂದ ಹಾಗೂ ವಿದ್ಯಾರ್ಥಿಗಳ ಮಧ್ಯೆ ಅಡೆತಡೆಯಿಲ್ಲದ ಅಂತರ–ಕ್ರಿಯೆಗಳಿಗೆ ಅನುವು ಮಾಡಿಕೊಡುವುದರಿಂದ, ತರಗತಿ ಕೊಠಡಿಗಳ ಹೊರಗಡೆ ಶಾಲೆಯಲ್ಲಿನ ಮುಕ್ತ ಪ್ರದೇಶಗಳಲ್ಲಿ ನಡೆಸುತ್ತೇವೆ. ಈ ಮುಕ್ತ ಜಾಗದ ತರಗತಿಯ ಅವಧಿಗಳಲ್ಲಿ ನಾವು ಎಲ್ಲರೂ ಒಬ್ಬರನ್ನೊಬ್ಬರು ನೋಡಬಹುದು ಹಾಗೂ ನಮ್ಮ ನಡುವಿನ ಮಾನವ ಸಂಬಂಧಗಳನ್ನು ಅನುಭವಿಸಬಹುದು ಎಂಬ ಕಾರಣಕ್ಕೆ ನಾನು ಮತ್ತು ವಿದ್ಯಾರ್ಥಿಗಳು ವೃತ್ತಾಕಾರದಲ್ಲಿ ಕುಳಿತುಕೊಳ್ಳುತ್ತೇವೆ. ಚರ್ಚಾ ವಿಷಯ, ಅದರ ಉದ್ದೇಶ, ಚರ್ಚೆಯಲ್ಲಿ ಅವರಿಂದ ನಿರೀಕ್ಷಿಸಲ್ಪಡುವುದನ್ನು ಕುರಿತು ನಾನೊಂದು ಕಿರು ಪರಿಚಯಾತ್ಮಕ ಮಾತುಗಳನ್ನು ಆಡುತ್ತೇನೆ. ಈ ಚರ್ಚೆಯನ್ನು ಒಂದು ಸಾಮೂಹಿಕ ಕಲಿಕೆಯ ಅನುಭವವಾಗಿ ನೋಡಬೇಕೆಂದು ಅವರನ್ನು ನಾನು ಉತ್ತೇಜಿಸುತ್ತೇನೆ, ತಮಗೆ ಹೇಳಬೇಕೆನಿಸಿದ್ದನ್ನು ಮುಕ್ತವಾಗಿ ವ್ಯಕ್ತಪಡಿಸಲು ಆಹ್ವಾನಿಸುತ್ತೇನೆ, ಹಾಗೂ ಯಾರೊಬ್ಬರನ್ನು ಅಪಹಾಸ್ಯಕ್ಕೀಡು ಮಾಡುವುದಾಗಲೀ ಅಥವಾ ಯಾರೊಬ್ಬರ ಬಗ್ಗೆ ಪೂರ್ವಾಗ್ರಹ ಅಭಿಪ್ರಾಯಗಳನ್ನು ಹೊಂದುವುದಾಗಲೀ ಇರಬಾರದೆಂದು ಒತ್ತಿ ಹೇಳುತ್ತೇನೆ.

ಸಂಗ್ರಹಿಸಲಾದ ಪ್ರಶ್ನೆಗಳಲ್ಲಿ ಯಾವುದಾದರೂ ಒಂದು ಪ್ರಶ್ನೆಯನ್ನು ಗಟ್ಟಿಯಾಗಿ ಓದುವ ಮೂಲಕ ನಾನು ಚರ್ಚೆಯನ್ನು ಆರಂಭಿಸುತ್ತೇನೆ (ನೋಡಿ ಬಾಕ್ಸ್ ೩).

**ಬಾಕ್ಸ್ 3: ಮುಕ್ತ ಚರ್ಚೆಗಳಲ್ಲಿ ಕೈಗೆತ್ತಿಕೊಳ್ಳಲಾದ ಪ್ರಶ್ನೆಗಳು ಹಾಗೂ ಅನುಸರಿಸಲಾದ ವಿಧಾನಗಳು**

**ಪ್ರಶ್ನೆ: ಯಾವುದು ಸುಂದರವಾದದ್ದು ಎನ್ನುವುದರ ಕುರಿತು ಹೇಗೆ ನಮ್ಮೆಲ್ಲರಿಗೂ ಒಂದೇ ತರಹದ ಕಲ್ಪನೆಗಳಿವೆ?**

'ಆಕರ್ಷಣೆಯ ಹಿಂದಿರುವ ವಿಜ್ಞಾನ (Science of attraction)' ದ ಕುರಿತಾದ ಈ ವಿಡಿಯೋ ಅನ್ನು ನಾವೆಲ್ಲ ನೋಡುತ್ತೇವೆ: https://www.youtube.com/watch?v=169N81xAffQ. ಸೌಂದರ್ಯ, ದೈಹಿಕ ವೈಶಿಷ್ಟ್ಯಗಳ ಕುರಿತು ನಕಾರಾತ್ಮಕ ಹೇಳಿಕೆಗಳ ಮೂಲಕ ಅವಮಾನಗೊಳಿಸುವುದು (body shaming) ಇತ್ಯಾದಿ ವಿಷಯಗಳ ಕುರಿತು ಇರುವಂತಹ ಸಾಮಾಜಿಕ ರೀತಿ–ರಿವಾಜುಗಳ ಬಗ್ಗೆಯೂ ಸಹ ನಾವು ಚರ್ಚಿಸುತ್ತೇವೆ. ಚರ್ಚೆಯನ್ನು ಕೆಲವೊಂದು ಪ್ರಶ್ನೆಗಳ ಮೂಲಕ, ಅಂದರೆ ಸುಂದರವಾಗಿರುವುದು ಎಂದರೆ ಏನು? ಸುಂದರವಾಗಿರುವುದು ಎಂದರೆ– ತೆಳ್ಳಗೆ, ಬೆಳ್ಳಗೆ, ಮಾಂಸ ಖಂಡಗಳಿಂದ ಕೂಡಿರುವುದು ಎಂಬುದೇ? ಸುಂದರವಾಗಿದ್ದೇವೆ ಎಂದು ಗುರುತಿಸಲ್ಪಡಲು, ಸೌಂದರ್ಯದ ಒಂದು ನಿರ್ದಿಷ್ಟ ಕಲ್ಪನೆಗೆ ಸರಿಹೊಂದಿದಂತೆ ಇರಬೇಕೇ? ಸೌಂದರ್ಯದ ಮಾನದಂಡವನ್ನು ನಿಷ್ಕರ್ಷೆ ಮಾಡುವವರು ಯಾರು? ಈ ವ್ಯಾಖ್ಯಾನ ರೂಪಿಸುವಲ್ಲಿ ಮಾಧ್ಯಮಗಳು ಪಾತ್ರ ವಹಿಸುತ್ತವೆಯೇ? ನಮ್ಮನ್ನು ನಾವು ಅಪ್ರಜ್ಞಾಪೂರ್ವಕವಾಗಿ ಮಾಧ್ಯಮಗಳಲ್ಲಿ ನೋಡುವ ಚಿತ್ರಗಳಂತೆ ರೂಪುಗೊಳ್ಳಲು ಅನುವು ಮಾಡಿಕೊಡುತ್ತೇವೆಯೇ? ನಮ್ಮದೇ ದೇಹಗಳೊಂದಿಗೆ ಒಂದು ಸಕಾರಾತ್ಮಕವಾದ ಸಂಬಂಧವನ್ನು ನಿರ್ಮಿಸಿಕೊಳ್ಳಲು ನಾವು ಏನು ಮಾಡಬಹುದು?

**ಪ್ರಶ್ನೆ: ಗರ್ಭವತಿ ಎಂದು ನಮಗೆ ಹೇಗೆ ತಿಳಿಯುತ್ತದೆ? ಅದರ ಲಕ್ಷಣಗಳು ಏನು?**

ಚರ್ಚೆಗೆ ನಮ್ಮನ್ನು ಸಿದ್ಧಗೊಳಿಸಿಕೊಳ್ಳುವುದಕ್ಕಾಗಿ ನಾವು ಈ ಕೆಳಗಿನ ವಿಡಿಯೋಗಳನ್ನು ನೋಡುತ್ತೇವೆ:

- ಗರ್ಭಾವಸ್ಥೆಯ ಚಕಿತಗೊಳಿಸುವ ಪರಿಣಾಮಗಳು: https://www.youtube.com/watch?v=F_ssj7-8rYg.
- ಗರ್ಭಾವಸ್ಥೆಯ ಕುರಿತು ಸ್ಥೂಲ ಆದರೆ ಮುಖ್ಯ ಮಾಹಿತಿಗಳನ್ನು ಒದಗಿಸುವ ವಿಡಿಯೋ: https://www.youtube.com/watch?v=BtsSbZ85yiQ.
- ಗರ್ಭಧಾರಣೆಯನ್ನು ಪತ್ತೆ ಹಚ್ಚುವ ಪರೀಕ್ಷೆಗಳು ಹೇಗೆ ಕೆಲಸ ಮಾಡುತ್ತವೆ: https://ed.ted.com/lessons/how-do-pregnancy-tests-work-tien-nguyen.

**ಪ್ರಶ್ನೆ: ಪ್ರನಾಳ ಶಿಶು ಎಂದರೆ ಏನು?**

ಕೃತಕ ಗರ್ಭಧಾರಣೆ (in-vitro fertilization) (IVF (ಐವಿಎಫ್)) ಕುರಿತು ಇರುವಂತಹ ಈ ಕೆಳಗಿನ ವಿಡಿಯೋ ಅನ್ನು ನಾವು ನೋಡುತ್ತೇವೆ: https://ed.ted.com/lessons/how-to-make-a-baby-in-a-lab-nassim-assefi-and-brian-a-levine.

**ಪ್ರಶ್ನೆ: ಮಹಿಳೆಯೊಬ್ಬಳು ಗರ್ಭಧಾರಣೆಯ ಹೊರತಾಗಿ ಮುಟ್ಟಾಗದೆ ಇರುವುದಕ್ಕೆ ಇನ್ನ್ಯಾವುದಾದರೂ ಕಾರಣಗಳಿವೆಯೇ?**

'ನೀನು ಏಕೆ ಮುಟ್ಟಾಗಲಿಲ್ಲ' ಎನ್ನುವುದರ ಕುರಿತು ಇರುವ ಒಂದು ವಿಜ್ಞಾನದ ಪ್ರದರ್ಶನ (scishow)ದ ವಿಡಿಯೋ ಅನ್ನು ನಾವು ನೋಡುತ್ತೇವೆ: https://youtu.be/DT37UwFPF8c.

ಮುಟ್ಟಿನ ಮೇಲೆ ಪೌಷ್ಠಿಕತೆ, ವ್ಯಾಯಾಮ, ಮತ್ತು ರಸದೂತಗಳ ಪ್ರಭಾವವನ್ನೂ ಸಹ ನಾವು ಚರ್ಚಿಸುತ್ತೇವೆ.

**ಪ್ರಶ್ನೆ: ಸಲಿಂಗಕಾಮ ಎಂದರೆ ಏನು? ಸಲಿಂಗಕಾಮಿಯಾಗಿರುವುದು ಸಹಜವೇ?**

LGBTIQA ಎಂದರೆ ಏನು ಎನ್ನುವುದನ್ನು ನಾನು ಇಲ್ಲಿ ವಿವರಿಸುತ್ತೇನೆ, ಹಾಗೂ ಇವುಗಳಲ್ಲಿ ಯಾವುದಾದರೂ ಒಂದಕ್ಕೆ ಸೇರಿದ್ದರೂ ಸಹ ಅದು ಸಂಪೂರ್ಣವಾಗಿ ಸಹಜ ಎಂದು ತಿಳಿಸುತ್ತೇನೆ. ಲಿಂಗ ಸಂಬಂಧಿ ಮತ್ತು ಸಂಬಂಧಿತ ಕಾನೂನುಗಳನ್ನು ಸುತ್ತುವರಿದಂತೆ ಇರುವಂತಹ ಸಾಮಾಜಿಕ ಪೂರ್ವಾಗ್ರಹಗಳನ್ನೂ ಸಹ ನಾವು ಚರ್ಚಿಸುತ್ತೇವೆ.

ಈ ತರಗತಿಗಳ ಅವಧಿಯಲ್ಲಿ ನಾನು ಚರ್ಚೆಗೆ ಕೈಗೆತ್ತಿಕೊಳ್ಳುವ, ಪದೇ ಪದೇ ಕೇಳಲಾಗುವ ಇನ್ನಿತರ ಕೆಲವು ಪ್ರಶ್ನೆಗಳು ಹೀಗಿವೆ:

- ಎಚ್ ಐ ವಿ ಮತ್ತು ಏಡ್ಸ್ ಎಂದರೆ ಏನು?
- ಲೈಂಗಿಕ ಕ್ರಿಯೆ ಸುಖಾನುಭವವನ್ನು ಹೇಗೆ ನೀಡುತ್ತದೆ?
- ಲೈಂಗಿಕ ಪರಾಕಾಷ್ಠೆ ಎಂದರೇನು?
- 14 ವರ್ಷ ವಯಸ್ಸಿಗೆ ಲೈಂಗಿಕ ಕ್ರಿಯೆಯಲ್ಲಿ ತೊಡಗಬೇಕೆಂಬುದು ಸರಿಯೇ?
- ಲೈಂಗಿಕ ಕ್ರಿಯೆ ನೋವು ಉಂಟುಮಾಡುತ್ತದೆಯೇ?
- ಅವಳಿಗಳು ಹೇಗೆ ರೂಪುಗೊಳ್ಳುತ್ತವೆ?
- ಅಶ್ಲೀಲಚಿತ್ರಗಳು ಎಂದರೆ ಏನು? ಅದು ಹಾನಿಕಾರಕವೇ?
- ಒಬ್ಬ ತಾಯಾಗುವ ಹೆಣ್ಣಿಗೆ ಆರೋಗ್ಯಕರವಾದ ಆಯ್ಕೆ ಯಾವುದು– ಶಸ್ತ್ರ ಚಿಕಿತ್ಸೆಯೋ ಅಥವಾ ಸಹಜ ಹೆರಿಗೆಯೋ?
- ಮುಷ್ಠಿಮೈಥುನಕ್ಕೆ ಸ್ತ್ರೀ ಸಮಾನಾರ್ಥಕವಾದದ್ದು ಇದೆಯೇ? ಅದು ಯಾವುದು?
- ಹದಿಹರೆಯದವರಿಗೆ ಲೈಂಗಿಕ ಕ್ರಿಯೆಯಲ್ಲಿ ಏಕೆ ಆಸಕ್ತಿ ಇರುತ್ತದೆ?

ಸಾಮಾನ್ಯವಾಗಿ, ನಾನು ಅಂಗರಚನೆ– ಆಧಾರಿತ ಪ್ರಶ್ನೆಗಳಿಗೆ ಸಂಬಂಧಿಸಿದಂತ ಪ್ರಶ್ನೆಯನ್ನು ಆಯ್ಕೆ ಮಾಡಿಕೊಳ್ಳುತ್ತೇನೆ. ಆ ಪ್ರಶ್ನೆಯು ಹೀಗಿರಬಹುದು, 'ಒಂದು ಅಂಡಾಣುವನ್ನು ಫಲವತ್ತಾಗಿಸಲು ಎಷ್ಟು ಸಲ ಲೈಂಗಿಕ ಕ್ರಿಯೆಯ ಅಗತ್ಯವಿದೆ? , ಅಥವಾ 'ಮುಟ್ಟಿನ ವಿಷಯವನ್ನು ಮುಕ್ತವಾಗಿ ಚರ್ಚಿಸಲಾಗದಂತಹ ನಿಷೇಧಿತ ವಿಷಯವೆಂದು ಏಕೆ ಪರಿಗಣಿಸಲಾಗುತ್ತದೆ? ', ಅಥವಾ 'ಲೈಂಗಿಕ ಕ್ರಿಯೆಯಲ್ಲಿ ತೊಡಗಿದಾಗ ನೋವುಂಟಾಗುತ್ತದೆಯೇ?'. ನಾನು ಈ ಪ್ರಶ್ನೆಗಳನ್ನು ಓದುವಾಗ ವಿದ್ಯಾರ್ಥಿಗಳು ನನ್ನ ಕಣ್ಣಲ್ಲಿ ಕಣ್ಣಿಟ್ಟು ನೋಡುವುದಿಲ್ಲ ಅಥವಾ ನೆಲವನ್ನು ದಿಟ್ಟಿಸಿ ನೋಡಲಾರಂಭಿಸುತ್ತಾರೆ. ಪ್ರಶ್ನೆಗಳನ್ನು ಓದಿ ಮುಗಿಸಿದ ಮೇಲೆ, ನಾನು ವೃತ್ತದಲ್ಲಿ ಕುಳಿತಿರುವ ಪ್ರತಿಯೊಬ್ಬರ ಪ್ರತಿಕ್ರಿಯೆಯನ್ನು ಗಮನಿಸಲು ಸಾಕಷ್ಟು ಸಮಯ ತೆಗೆದುಕೊಳ್ಳುತ್ತೇನೆ. ನಂತರ "ಪ್ರಶ್ನೆಗಳ ಬಗ್ಗೆ ನಿಮಗೇನನ್ನಿಸುತ್ತದೆ? ಈ ಪ್ರಶ್ನೆಯ ಅರ್ಥ ಯಾರಿಗಾದರೂ ತಿಳಿದಿದೆಯೇ? " ಎನ್ನುವಂತಹ ಪ್ರಶ್ನೆಗಳನ್ನು ಕೇಳುವುದರಿಂದ ವಿದ್ಯಾರ್ಥಿಗಳು ಮಾತನಾಡುವುದನ್ನು ಉತ್ತೇಜಿಸುತ್ತೇನೆ. ನಿಧಾನವಾಗಿ, ವಿದ್ಯಾರ್ಥಿಗಳು ಮಾತನಾಡಲು ಪ್ರಾರಂಭಿಸುತ್ತಾರೆ. ಕೊನೆಯಲ್ಲಿ, ನಾನು ಗಟ್ಟಿಯಾಗಿ ಓದುವ ಪ್ರತಿಯೊಂದು ವಿದ್ಯಾರ್ಥಿಯ ಪ್ರಶ್ನೆಗಳಿಗೆ, ಒಂದೋ ನಾನು ಅವಶ್ಯಕವಾದ ಮಾಹಿತಿಯನ್ನು ಕೊಡುತ್ತೇನೆ, ಅಥವಾ ಒಂದು ಗುಂಪಾಗಿ ನಾವು ತೀರ್ಮಾನಗಳಿಗೆ ಬರುತ್ತೇವೆ ಅಥವಾ ಒಟ್ಟುಗೂಡಿ ನಮ್ಮ ಆಲೋಚನೆಗಳನ್ನು ಸಂಕ್ಷೇಪಿಸುತ್ತೇವೆ. ಈ ಪರಿಚಯಾತ್ಮಕ ಚರ್ಚಾವಧಿಯು ಸಾಮಾನ್ಯವಾಗಿ ವಿದ್ಯಾರ್ಥಿಗಳ ಆಲೋಚನೆಗಳನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಲು ನನಗೆ ನೆರವಾಗುತ್ತದೆ; ಜೊತೆಗೆ ಸಮಾನ ಮನಸ್ಕರ ಪ್ರಭಾವಗಳನ್ನು, ಹಾಗೂ ಅವರ ಮುಜುಗರದ ಮಟ್ಟಗಳನ್ನು ಗ್ರಹಿಸಲೂ ಸಹ ನೆರವಾಗುತ್ತದೆ. ಇದು ವಿದ್ಯಾರ್ಥಿಗಳಿಗೆ ತಮ್ಮ ಆಲೋಚನೆಗಳನ್ನು ತಮ್ಮ ಸಹಪಾಠಿಗಳ ಮುಂದೆ ಹೆಚ್ಚು ಆತ್ಮವಿಶ್ವಾಸದಿಂದ ವ್ಯಕ್ತಪಡಿಸಲು ನೆರವಾಗುತ್ತದೆ. ಚರ್ಚೆಯನ್ನು ಸುಗಮಗೊಳಿಸುವಂತಹ ಇದೇ ರೀತಿಯ ವಿಶಾಲವಾದ ವಿಧಾನವನ್ನು ಬಳಸಿಕೊಂಡು ನಾನು ಇತರ ಪ್ರಶ್ನೆಗಳನ್ನು ಕೈಗೆತ್ತಿಕೊಳ್ಳುತ್ತೇನೆ. ಪ್ರಶ್ನೆಗಳಿಗೆ ಸಾಧ್ಯವಾದಷ್ಟು ಮಟ್ಟಿಗೆ ಸಮಗ್ರವಾಗಿ ಉತ್ತರಿಸಲು, ಮಾನವನ ಮಿದುಳು, ವ್ಯಸನಗಳು, ಮಾದಕ ದ್ರವ್ಯಗಳು, ಅಶ್ಲೀಲ ಚಿತ್ರಗಳು, ಅಸ್ತಿತ್ವದಲ್ಲಿರುವ ಸಾಮಾಜಿಕ ವಿಧಿನಿಷೇಧಗಳು, ಒಪ್ಪಿಗೆ, ಲೈಂಗಿಕ ಹಕ್ಕುಗಳು, ಹಾಗೂ ಆನಂದದ ಅನುಭವದಂತಹ ಅನೇಕ ಸಂಬಂಧಿತ ವಿಷಯಗಳನ್ನೂ ಚರ್ಚಿಸಬಹುದು. ಅಲ್ಲದೆ, ಚರ್ಚೆಯಲ್ಲಿ ಬಂದಂತಹ ವಿಷಯಗಳ ಕುರಿತು ಉತ್ತಮವಾದ ದೃಶ್ಯಾತ್ಮಕ ತಿಳಿವಳಿಕೆಯನ್ನು ವಿದ್ಯಾರ್ಥಿಗಳು ಪಡೆಯಲು ನೆರವಾಗಲೆಂದು ಸೂಕ್ತವೆನಿಸಿದ ಸನ್ನಿವೇಶಗಳಲ್ಲಿ ನಾನು ಅಲ್ಪಾವಧಿಯ ವಿಡಿಯೋಗಳನ್ನು ತೋರಿಸುತ್ತೇನೆ.

ವಿದ್ಯಾರ್ಥಿಗಳು ಈ ಚರ್ಚೆಗಳಿಗೆ ಸತತವಾಗಿ ಸಕಾರಾತ್ಮಕವಾದ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುತ್ತಾರೆ, ಮತ್ತು ವಿದ್ಯಾರ್ಥಿಗಳು ಚರ್ಚೆಯನ್ನು ಅವರ ನಂತರದ ತರಗತಿಯ ಅವಧಿಗೂ ಮುಂದುವರೆಸಲು ಬಯಸುತ್ತಿದ್ದುದರಿಂದ, ಹಲವಾರು ಸಲ ನನಗೆ ತರಗತಿಯನ್ನು ಮುಗಿಸುವುದು ಕಷ್ಟವಾಗುತ್ತಿತ್ತು. ಪ್ರತಿಯೊಂದು ತರಗತಿಯಲ್ಲೂ ಕೆಲವು ವಿದ್ಯಾರ್ಥಿಗಳು ವಾಚಾಳಿ ವಿದ್ಯಾರ್ಥಿಗಳಿದ್ದು, ಅವರು ಗಟ್ಟಿಯಾಗಿ ಪ್ರಶ್ನೆಗಳನ್ನು ಕೇಳುತ್ತಾರೆ, ಇನ್ನು ಸಂಕೋಚ ಸ್ವಭಾವದ ಕೆಲವರು ಪ್ರಶ್ನೆಗಳನ್ನು ಕೇಳಲು ನಾನು ಅವರನ್ನು ಉದ್ದೇಶಿಸಬೇಕೆಂದು ನನಗೆ ಸಂಜ್ಞೆಯ ಮೂಲಕ ಹೇಳುತ್ತಾರೆ. ತಮ್ಮ ಭಾವನೆಗಳೊಂದಿಗೆ ಸ್ಪಷ್ಟವಾಗಿ ಸೆಣಸಾಡುವ ಕೆಲವರು ಸಹ ಇರುತ್ತಾರೆ. ನಾವು ಒಂದಾದ ಮೇಲೊಂದರಂತೆ ಪ್ರಶ್ನೆಗಳನ್ನು ಕೈಗೆತ್ತಿಕೊಳ್ಳುತ್ತಿದ್ದಂತೆ, ವಿದ್ಯಾರ್ಥಿಗಳು ಹೆಚ್ಚು ಮುಕ್ತವಾಗಿ ಹೇಳಿಕೊಳ್ಳಲಾರಂಭಿಸುತ್ತಾರೆ. ಸಂಕೋಚಗಳನ್ನು ಸಡಿಲಿಸುವುದರಲ್ಲಿ ಹಾಗೂ ತರಗತಿಯ ಒಟ್ಟಾರೆ ಅಂತರಕ್ರಿಯೆಯ ವಾತಾವರಣವನ್ನು ಸೃಷ್ಟಿಸುವುದರಲ್ಲಿ, ಸಮಾನ ಮನಸ್ಕರು ಬಹಳ ಮುಖ್ಯವಾದ ಪಾತ್ರವನ್ನು ವಹಿಸುತ್ತಾರೆ ಎನ್ನುವುದನ್ನು ನಾನು ಗಮನಿಸಿದ್ದೇನೆ. ಉದಾಹರಣೆಗೆ, ತಮ್ಮ ಒಬ್ಬ ಸಹಪಾಠಿ ಪ್ರಶ್ನೆ ಕೇಳುವುದನ್ನು ನೋಡಿದಾಗ ಇತರರಿಗೂ ಪ್ರಶ್ನೆ ಕೇಳಲು ಉತ್ತೇಜನ ಸಿಗುತ್ತದೆ. ಹಾಗೆಯೇ, ಒಬ್ಬ ಸಹಪಾಠಿ ಮಾಡುವ ಒಂದು ಲಘುವಾದ ಹಾಸ್ಯ ತರಗತಿಯಲ್ಲಿನ ಬಿಗು ವಾತಾವರಣವನ್ನು ಸಡಿಲಗೊಳಿಸುತ್ತದೆ. ಒಬ್ಬ ಶಿಕ್ಷಕಳಾಗಿ, ನಾನು ವಿದ್ಯಾರ್ಥಿಗಳಿಂದ ಬರುವ ಎಲ್ಲ ಪ್ರಶ್ನೆಗಳಿಗೂ ತಟಸ್ಥಳಾಗಿ ಮತ್ತು ಪೂರ್ವಾಗ್ರಹಗಳಿಲ್ಲದೆ ಇರುವುದರ ಮೂಲಕ ಅಂತಹದೊಂದು ಪೂರಕವಾದ ವಾತಾವರಣದ ನಿರ್ಮಾಣಕ್ಕೆ ಅನುವು ಮಾಡಿಕೊಡುತ್ತೇನೆ. ಇದು ವಿದ್ಯಾರ್ಥಿಗಳಲ್ಲಿ ವಿಶ್ವಾಸವನ್ನು ಮೂಡಿಸಲು ನೆರವಾಗಿ ಇದರ ಪರಿಣಾಮವಾಗಿ ವಿದ್ಯಾರ್ಥಿಗಳು ಧೈರ್ಯವಾಗಿ ಸಾಮಾನ್ಯ ಹಾಗೂ ವೈಯಕ್ತಿಕವಾದ ಎರಡೂ ರೀತಿಯದ ಮುಂದಿನ ಪ್ರಶ್ನೆಗಳನ್ನು ಕೇಳಲು ಅನುವು ಮಾಡಿಕೊಡುತ್ತದೆ. ಕೆಲವೊಮ್ಮೆ, ವಿದ್ಯಾರ್ಥಿಗಳು ಸಮುದಾಯದ/ಸಾಮಾಜಿಕ ರೀತಿ ರಿವಾಜುಗಳು, ದೇಹ ಮನಃಚಿತ್ರಗಳು, ಅಥವಾ ಸಿದ್ಧಮಾದರಿಗಳು ತಮ್ಮ ಯೋಗಕ್ಷೇಮದ ಮೇಲೆ ಪ್ರಭಾವ ಬೀರುವಂತಹ ವೈಯಕ್ತಿಕ ಅನುಭವಗಳನ್ನು ಸಹ ಹಂಚಿಕೊಳ್ಳಬಹುದು. ಕೆಲವು ವಿದ್ಯಾರ್ಥಿಗಳು ಮನೆಗಳಲ್ಲೂ ಈ ಚರ್ಚೆಗಳನ್ನು ಮುಂದುವರೆಸಿ, ಹೆಚ್ಚು ಪ್ರಶ್ನೆಗಳೊಂದಿಗೆ ತರಗತಿಗಳಿಗೆ ಹಿಂತಿರುಗುತ್ತಾರೆ. ಬಹಳಷ್ಟು ಸಲ, ಪ್ರಶ್ನೆಗಳನ್ನು ಕೇಳುತ್ತಾ ಚರ್ಚೆಗಳಲ್ಲಿ ಭಾಗವಹಿಸುವಂತಹ ಈ ಅಭ್ಯಾಸವು ಅವರ ನಂತರದ ತರಗತಿಯಲ್ಲಿಯೂ ಮುಂದುವರೆಯುತ್ತದೆ. ಉದಾಹರಣೆಗೆ, ಈ ಕೆಲವು ಗುಂಪುಗಳಲ್ಲಿದ್ದ ವಿದ್ಯಾರ್ಥಿಗಳು ಹನ್ನೆರಡನೇ ತರಗತಿಯಲ್ಲೂ ಇದೇ ವಿಷಯಗಳನ್ನು ಮತ್ತೆ ಚರ್ಚೆಗೆ ತೆಗೆದುಕೊಳ್ಳಲು ಬಯಸಿದರು. ಕೆಲವು ವಿದ್ಯಾರ್ಥಿಗಳು ಒಂಬತ್ತನೇ ತರಗತಿಯಲ್ಲಿದ್ದಾಗ ಕೇಳಿದ್ದ ಪ್ರಶ್ನೆಗಳನ್ನೇ ಮತ್ತೆ ಕೇಳಿದರು. ಆದ್ದರಿಂದ ಈ ಘಟಕವನ್ನು ವಿವಿಧ ಶೈಕ್ಷಣಿಕ ಹಂತಗಳಲ್ಲೂ ಪುನರಾವರ್ತಿಸುವುದು ಸಹಾಯವಾಗಬಹುದು.

## (ಸಿ) ಇತರ ಅಧ್ಯಾಪಕರಿಗೆ ಆಹ್ವಾನ

ನಾನು ಅನುಸರಿಸಿದ ಇನ್ನೊಂದು ಆಸಕ್ತಿದಾಯಕವಾದ ವಿಧಾನವೆಂದರೆ ಅದು ನನ್ನ ಶಾಲಾ ಸಮುದಾಯದ ಇತರ ಸದಸ್ಯರನ್ನು ನಿರ್ದಿಷ್ಟ ಪ್ರಶ್ನೆಗಳನ್ನು ಉದ್ದೇಶಿಸಲು ಅವರನ್ನು ಆಹ್ವಾನಿಸಿದ್ದು. ಉದಾಹರಣೆಗೆ, ಇತ್ತೀಚೆಗಷ್ಟೇ ತಾಯಿಯಾಗಿದ್ದ ಒಬ್ಬ ಗಣಿತದ ಶಿಕ್ಷಕಿಯು, ಮಗುವಿಗೆ ಜನ್ಮನೀಡುವ ವಿವಿಧ ವಿಧಾನಗಳನ್ನು ಹಾಗೂ ವಿಶಿಷ್ಟವಾಗಿ ನೀರಿನೊಳಗೆ ಜನ್ಮ ನೀಡಿದ ಅವರ ಅನುಭವವನ್ನು ಹಂಚಿಕೊಂಡರು. ಶಾಲೆಯ ವೈದ್ಯರು ಪ್ರಜನನ ಆರೋಗ್ಯದ ಕುರಿತು ತಮಗಿರುವ ಪರಿಣಿತಿಯನ್ನು ಹಂಚಿಕೊಂಡರೆ, ಮನಃಶಾಸ್ತ್ರದಲ್ಲಿ ಪದವಿಯನ್ನು ಪಡೆದುಕೊಂಡ ಶಿಕ್ಷಕರೊಬ್ಬರು ಪ್ರಜನನಕ್ಕೆ ಸಂಬಂಧಿಸಿದಂತೆ ಸಮಾಜಶಾಸ್ತ್ರೀಯ ಹಾಗೂ ಮನಃಶಾಸ್ತ್ರೀಯ ಅಂಶಗಳನ್ನು ಚರ್ಚಿಸಿದರು. ಇಂತಹ ಪ್ರತಿಯೊಂದು ಚರ್ಚೆಯು ಶ್ರೀಮಂತವಾದ ಅನುಭವವಾಗಿದ್ದು, ಅದು ವಿದ್ಯಾರ್ಥಿಗಳು ತಮ್ಮ ಶಿಕ್ಷಕರೊಂದಿಗೆ ಒಂದು ವಿನೂತನವಾದ ಸನ್ನಿವೇಶದಲ್ಲಿ ಸಂಬಂಧ ರೂಪಿಸಿಕೊಳ್ಳಲು ಅವಕಾಶವನ್ನು ಒದಗಿಸಿತು.

## ಅಂತಿಮ ನುಡಿ

ಹಲವಾರು ವರ್ಷಗಳ ನನ್ನ ಅನುಭವದಲ್ಲಿ ನಾನು ಗಮನಿಸಿರುವುದೇನೆಂದರೆ, ಈ ಘಟಕದ ಗೋಷ್ಠಿಯನ್ನು ವಿದ್ಯಾರ್ಥಿಗಳು ಎರಡು ಕಾರಣಕ್ಕಾಗಿ ಎದುರು ನೋಡುತ್ತಿರುತ್ತಾರೆ: ಒಂದು, ಹೆಚ್ಚಿನ ಮಾಹಿತಿಯನ್ನು ಪಡೆದುಕೊಳ್ಳಲು ಅವರು ಕಾತುರರಾಗಿರುತ್ತಾರೆ ಮತ್ತು ಇನ್ನೊಂದು, ಚರ್ಚೆ ಮಾಡಲು ಇರುವ ಅವಕಾಶವನ್ನು ಅವರು ಗೌರವಿಸುತ್ತಾರೆ. ಈ ಘಟಕದ ಉದ್ದಕ್ಕೂ ಸತತವಾಗಿ ಉತ್ಸಾಹಪೂರ್ಣ ಚರ್ಚೆಗಳು ನಡೆಯುತ್ತಿದ್ದವು (ಮೊದಲ ಒಂದೆರಡು ತರಗತಿಗಳಲ್ಲಿ ವಿದ್ಯಾರ್ಥಿಗಳನ್ನು ಭಾಗವಹಿಸುವಂತೆ ಮಾಡುವುದು ಒಂದು ಕಷ್ಟದ ಕೆಲಸವಾಗಿದ್ದುದು ಅನಿವಾರ್ಯ ಎನ್ನುವುದನ್ನು ಹೊರತುಪಡಿಸಿದರೆ). ಘಟಕದ ಕೆಲವು ಭಾಗಗಳು ಅತಿಯಾದ ಮಾಹಿತಿಗಳಿಂದ ಕೂಡಿದ್ದರೂ ಸಹ, ಒಟ್ಟಾರೆ ಕಲಿಕೆಯ ಅನುಭವವನ್ನು ವಿದ್ಯಾರ್ಥಿಗಳು ಆನಂದಿಸಿದರು. ಈ ಘಟಕವು ಪಠ್ಯಕ್ರಮದಲ್ಲಿನ ಸಂಬಂಧಿತ ಘಟಕದ ಎಲ್ಲಾ ಭಾಗಗಳನ್ನು ಒಳಗೊಳ್ಳುವುದರಿಂದ, ಪರೀಕ್ಷಾ–ಕೇಂದ್ರಿತ ದೃಷ್ಟಿಯಿಂದ ಈ ಘಟಕದ ಎಲ್ಲಾ ವಿಷಯಗಳನ್ನು ಹೇಳಿಕೊಡಲು ಹೆಚ್ಚುವರಿ ಪಾಠ ತರಗತಿಗಳನ್ನು ನಡೆಸುವುದು ಅವಶ್ಯಕವಾಗುವುದಿಲ್ಲ.

ಈ ಲೇಖನದಲ್ಲಿ ವಿವರಿಸಲಾಗಿರುವ ವಿಧಾನಗಳು ಯಾವುದೇ ಒಬ್ಬ ಶಿಕ್ಷಕರನ್ನು ಪ್ರಾರಂಭದಲ್ಲಿ ಧೃತಿಗೆಡಿಸಿದರೂ, ಕೊನೆಯಲ್ಲಿ ನಿಜವಾಗಿಯೂ ಇದೊಂದು ಸಂತೃಪ್ತಿ ತಂದುಕೊಡುವ ಅನುಭವವಾಗಲು ಸಾಧ್ಯ. ಲೇಖನದಲ್ಲಿ ಹಂಚಿಕೊಳ್ಳಲಾಗಿರುವ ಸಂಪನ್ಮೂಲಗಳು ಶಿಕ್ಷಕರು ಅವಶ್ಯಕ ಹಾಗೂ ನಿಖರವಾದಂತಹ ಮಾಹಿತಿಗಳನ್ನು ಪಡೆಯುವಂತೆ ಅವರನ್ನು ಸಿದ್ಧಪಡಿಸಲು ನೆರವಾಗಬಹುದು. ಆದಾಗ್ಯೂ, ಭಿನ್ನರೂಪದ, ಪೂರ್ವಗ್ರಹದ, ಹಾಗೂ ಮೇಲರಿಮೆಯಂತಹ ಧೋರಣೆಗಳಿಗೆ ಸಂವೇದನಾಶೀಲರಾಗಿರುವಂತೆ ಮಾನಸಿಕವಾಗಿ ಸಿದ್ಧವಾಗಿರುವುದು ಸಹ ಮುಖ್ಯವಾಗುತ್ತದೆ; ಎಲ್ಲರನ್ನೂ ಒಳಗೊಳ್ಳುವುದು, ಹಾಗೂ ಭಯದಿಂದ ತುಂಬಿದ ಚರ್ಚೆಗಳು ನಡೆಯದಂತೆ ಯಾವಾಗಲೂ ನೋಡಿಕೊಳ್ಳಬೇಕಾಗುತ್ತದೆ. ಇದು ಸುಲಭದ ಕೆಲಸವಲ್ಲ ಎನ್ನುವುದರಲ್ಲಿ ಸಂಶಯವಿಲ್ಲ, ಅದರಲ್ಲೂ ಸಮಯ ಹಾಗೂ ಪಠ್ಯಕ್ರಮ ಮುಗಿಸಬೇಕಾದ ವಿಷಯಕ್ಕೆ ಸಂಬಂಧಿಸಿದಂತೆ ಇರುವ ಹೆಚ್ಚಿನ ನಿರ್ಬಂಧಗಳನ್ನು ಪರಿಗಣಿಸಿದಾಗ. ಆದರೆ ಕೊನೆಯಲ್ಲಿ ನಾವು ಕೊಂಚ ಯೋಚಿಸಿ ಕೇಳಿಕೊಳ್ಳಬೇಕಾದ ಪ್ರಶ್ನೆಗಳು ಇವು: ನಾವು ಏಕೆ ಬೋಧನೆ ಮಾಡುತ್ತೇವೆ? ಶಿಕ್ಷಕರಾಗಿ ನಾವು ಹೊಂದಿರುವ ಮೌಲ್ಯಗಳು ಯಾವುವು? ವಿದ್ಯಾರ್ಥಿಗಳಿಂದ ನಮ್ಮ ನಿರೀಕ್ಷೆಗಳೇನು? ವಿದ್ಯಾರ್ಥಿಗಳು ವಿವೇಚನಶೀಲರಾಗಿ ಆಲೋಚನೆ ಮಾಡಲು, ಪರ್ಯಾಲೋಚಿಸಲು, ಹಾಗೂ ತಮಗನಿಸಿದ್ದನ್ನು ಮುಕ್ತವಾಗಿ ವ್ಯಕ್ತಪಡಿಸಲು ಅನುವು ಮಾಡಿಕೊಡುವುದು ನಮ್ಮ ಜವಾಬ್ದಾರಿಯಲ್ಲವೇ?

## ಪ್ರಮುಖ ಕಲಿಕೆಗಳು



- ವಿದ್ಯಾರ್ಥಿಗಳ ಕುತೂಹಲಕ್ಕೆ ಪೂರಕವಾದಂತಹ ವಾತಾವರಣವನ್ನು ಸೃಷ್ಟಿ ಮಾಡುವುದು ವಿದ್ಯಾರ್ಥಿಗಳಿಗೆ ಹಾಗೂ ಶಿಕ್ಷಕರಿಗೆ ಇಬ್ಬರಿಗೂ ಕಲಿಯುವುದಕ್ಕೆ ಅವಕಾಶಗಳನ್ನು ಒದಗಿಸುವುದು.
- ವಿದ್ಯಾರ್ಥಿಗಳಿಗೆ ಯೋಚಿಸಲು ಮತ್ತು ಪರ್ಯಾಲೋಚಿಸಲು ಅನುವು ಮಾಡಿಕೊಡುವಂತಹ ನೇರ ಹಾಗೂ ಮುಕ್ತವಾದ ಚರ್ಚೆಗಳು, ಅದರಲ್ಲೂ ಸೂಕ್ಷ್ಮವಾದ ವಿಷಯಗಳನ್ನು ಕುರಿತು, ಅವರಿಗೆ ತಮ್ಮ ಸಂಕೋಚಗಳನ್ನು ಕಳೆದುಕೊಳ್ಳಲು ನೆರವಾಗುತ್ತದೆ.
- ವಿದ್ಯಾರ್ಥಿಗಳಿಗೆ ಒಂದು ಸುಭದ್ರವಾದ ಕಲಿಕಾ ವಾತಾವರಣವನ್ನು ಒದಗಿಸಬೇಕೆಂದರೆ ಶಿಕ್ಷಕರಾದವರು ಪೂರ್ವಗ್ರಹ ಅಭಿಪ್ರಾಯಗಳನ್ನು ಹೊಂದದಿರುವುದು ಮತ್ತು ಎಲ್ಲರನ್ನೂ ಒಳಗೊಳ್ಳುವಂತಿರುವುದು ಮುಖ್ಯವಾಗುತ್ತದೆ.

ಕೃತಜ್ಞತೆಗಳು:
ಅದ್ಭುತವಾದ ಪ್ರಶ್ನೆಗಳನ್ನು ಕೇಳಿದ್ದಕ್ಕಾಗಿ ನನ್ನ ವಿದ್ಯಾರ್ಥಿಗಳಿಗೆ, ಹಾಗೂ ತಮ್ಮ ಉತ್ಸಾಹಭರಿತ ಹಾಗೂ ಸತತ ಬೆಂಬಲಕ್ಕಾಗಿ ನನ್ನ ಸಹೋದ್ಯೋಗಿಗಳಿಗೆ ನನ್ನ ವಂದನೆಗಳು. ತಮ್ಮ ವಿವರವಾದ ಪ್ರತಿಕ್ರಿಯೆಗಳು ಹಾಗೂ ಸಲಹೆಗಳನ್ನು ಕೊಟ್ಟಂತಹ ಸಂಪಾದಕರು ಹಾಗೂ ವಿಮರ್ಶಕರಿಗೂ ಸಹ ನನ್ನ ವಂದನೆಗಳು.

ಟಿಪ್ಪಣಿ:
ಈ ಲೇಖನದ ಶೀರ್ಷಿಕೆಯ ಹಿನ್ನೆಲೆಯಲ್ಲಿ ಬಳಸಿದ ಚಿತ್ರದ ಮೂಲ: Discussing reproduction. Credits: Shreya Kedia. License: CC-BY-NC.

### ಕೆಲವು ಉಪಯುಕ್ತ ಸಂಪನ್ಮೂಲಗಳು

1. TARSHI. The Yellow Book: A parent's guide to sexuality education. Zubaan Publishers (2010).
2. TARSHI. The Blue Book: What you want to know about yourself. Zubaan Publishers (2013).
3. TARSHI. The Orange Book: A teachers' workbook on sexuality education. TARSHI publications (2015).
4. Campbell, N. A., Urry, L. A., Cain, M. L., Wasserman, S. A., Minorsky, P. V., & Reece, J. B. Biology: A global approach. Pearson (2018).
5. Taylor, D. J., Green, N. P. O., & Stout, G. W. Biological science. Cambridge University Press (1998).
6. EONS Collection. How sex became a thing|Eons. PBS LearningMedia (April 7, 2021). Retrieved on July 6, 2022, from https://www.pbslearningmedia.org/resource/sex-thing-eons/sex-thing-eons/.
7. Schilthuizen, M. The evolution of animal genitalia. YouTube (April 24, 2017). Retrieved on July 6, 2022, from https://www.youtube.com/watch?v=vcPJkz-D5lI.



**ಧನ್ಯಾ. ಕೆ.** ಪ್ರೌಢಶಾಲೆಯ ಜೀವವಿಜ್ಞಾನ ಶಿಕ್ಷಕರಾಗಿದ್ದರು. ಶಿಕ್ಷಕರಾಗುವುದಕ್ಕೆ ಮೊದಲು, ಅವರು ನರಮಂಡಲದ ಅನುವಂಶಿಕತೆ (Neurogenetics) ಯಲ್ಲಿ ಡಾಕ್ಟರೇಟ್ ಪದವಿಯನ್ನು ಪಡೆದುಕೊಂಡರು. ಜೀವವಿಜ್ಞಾನವು ಹೆಚ್ಚು ಸುಲಭ ಗ್ರಾಹ್ಯವಾಗುವಂತೆ ಮತ್ತು ಕಲಿಯಲು ಉತ್ಸಾಹ ಹುಟ್ಟಿಸುವಂತೆ ಮಾಡುವುದರಲ್ಲಿ, ಹಾಗೂ ವಿದ್ಯಾರ್ಥಿಗಳು ಸಕ್ರಿಯ ಕಲಿಕಾರ್ಥಿಗಳಾಗುವುದನ್ನು ಬೆಂಬಲಿಸುವುದರಲ್ಲಿ ಅವರು ಆಸಕ್ತಿ ಹೊಂದಿದ್ದಾರೆ. ಅವರನ್ನು ಈ ಕೆಳಗಿನ ಜಾಲತಾಣದಲ್ಲಿ ಸಂಪರ್ಕಿಸಬಹುದು: dhanyak2@gmail.com.

ಅನುವಾದ: **ಎಚ್. ಜಿ. ಜಯಲಕ್ಷ್ಮಿ** | ಪರಿಶೀಲನೆ: **ಕಲ್ಪನಾ ಚಕ್ರವರ್ತಿ**